# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಜನವರಿ ೪, ೨೦೧೪ (ಪುಷ್ಯ ೧೪, ಶಕ ವರ್ಷ ೧೯೩೫) | ನಂ. ೧೧ |
|---|---|---|
| Part – IV-A | Bangalore, Saturday, January 4, 2014 (Pushya 14, Shaka Varsha 1935) | No. 11 |

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 38 ಶಾಸನ 2013, ಬೆಂಗಳೂರು, ದಿನಾಂಕ: 04.01.2014**

ಕರ್ನಾಟಕ ರಾಜ್ಯ ಮಹಿಳಾ ಆಯೋಗ (ತಿದ್ದುಪಡಿ) ವಿಧೇಯಕ, 2013ಕ್ಕೆ 2014 ರ ಜನವರಿ ಮಾಹೆಯ ಮೂರನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2014ರ ಕರ್ನಾಟಕ ಅಧಿನಿಯಮ ಸಂಖ್ಯೆ: **04** ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2014ರ ಕರ್ನಾಟಕ ಅಧಿನಿಯಮ ಸಂಖ್ಯೆ 04**

(2014ರ ಜನವರಿ ತಿಂಗಳ ನಾಲ್ಕನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ರಾಜ್ಯ ಮಹಿಳಾ ಆಯೋಗ (ತಿದ್ದುಪಡಿ) ಅಧಿನಿಯಮ, 2013**

(2014ರ ಜನವರಿ ತಿಂಗಳ ಮೂರನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995ನ್ನು (1995ರ ಕರ್ನಾಟಕ ಅಧಿನಿಯಮ 17) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಮಹಿಳಾ ಆಯೋಗ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995ರ (1995ರ ಕರ್ನಾಟಕ ಅಧಿನಿಯಮ 17) 3ನೇ ಪ್ರಕರಣದ (2)ನೇ ಉಪಪ್ರಕರಣದ (ಬಿ) ಖಂಡದ ಮೊದಲನೇ ಪರಂತುಕದಲ್ಲಿ "ಅನುಸೂಚಿತ ಜಾತಿಗಳಿಗೆ ಸೇರಿದ ಒಬ್ಬ ಸದಸ್ಯ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬ ಸದಸ್ಯನಿರತಕ್ಕದ್ದು" ಎಂಬ ಪದಗಳಿಗೆ "ಅನುಸೂಚಿತ ಜಾತಿಗಳಿಗೆ ಸೇರಿದ ಒಬ್ಬ ಸದಸ್ಯ, ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬ ಸದಸ್ಯ ಹಾಗೂ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಒಬ್ಬ ಸದಸ್ಯನಿರತಕ್ಕದ್ದು" ಮತ್ತು ಎಂಬ ಪದಗಳು ಮತ್ತು ಅಲ್ಪವಿರಾಮ ಚಿಹ್ನೆಯನ್ನು ಪ್ರತಿಯೋಜಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಬಿ. ಚಂಗಪ್ಪ**
ಸರ್ಕಾರದ ಕಾರ್ಯದರ್ಶಿ(ಪ್ರ)\
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಶನಿವಾರ, ಜನವರಿ ೪, ೨೦೧೪ (ಪುಷ್ಯ ೧೪, ಶಕ ವರ್ಷ ೧೯೩೫) | ನಂ. ೧೨ |
| **Part – IV-A** | **Bangalore, Saturday, January 4, 2014 (Pushya 14, Shaka Varsha 1935)** | **No. 12** |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 41 ಶಾಸನ 2013, ಬೆಂಗಳೂರು, ದಿನಾಂಕ: 04.01.2014**

The Karnataka Agricultural Produce Marketing (Regulation and Development) (Second Amendment) Bill, 2013ಕ್ಕೆ 2014ರ ಜನವರಿ ತಿಂಗಳ ಮೂರನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2014ರ ಕರ್ನಾಟಕ ಅಧಿನಿಯಮ ಸಂಖ್ಯೆ: **05** ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

## KARNATAKA ACT NO. 05 OF 2014

(First published in the Karnataka Gazette Extra-ordinary on the fourth day of January, 2014)

# THE KARNATAKA AGRICULTURAL PRODUCE MARKETING (REGULATION AND DEVELOPMENT) (SECOND AMENDMENT) ACT, 2013

(Received the assent of the Governor on the Third day of January, 2014)

An Act further to amend the Karnataka Agricultural Produce Marketing (Regulation and Development) Act, 1966;

Whereas, it is expedient to further to amend the Karnataka Agricultural Produce Marketing (Regulation and Development) Act, 1966 (Karnataka Act 27 of 1966) for the purposes hereinafter appearing;

Be it enacted by the Karnataka State Legislature in the Sixty-Fourth Year of the Republic of India, as follows:-

**1. Title and commencement.-** (1) This Act may be called the Karnataka Agricultural Produce Marketing (Regulation and Development) (Second Amendment) Act, 2013.

(2) It shall come into force at once.

**2. Amendment of section 6.-** In the Karnataka Agricultural Produce Marketing (Regulation and Development) Act, 1966 (Karnataka Act 27 of 1966) (hereinafter referred to as the principal Act), in section 6, in sub-section (2),-

(i) in clause (a), after the words "any other specified area", the words "including a warehouse" shall be inserted.

(ii) in clause (d), after the second proviso, the following shall be inserted, namely:-

"Provided also that, the Director of Agricultural Marketing may declare a warehouse in a sub-market, market sub-yard or sub-market yard in such manner as may be prescribed."

**3. Amendment of section 65.-** In section 65 of the principal Act, in sub-section (2), after the third proviso, the following shall be inserted, namely:-

"Provided also that in case of any private markets established under section 72A of the Act, market fee shall be levied and collected at the rate of thirty three percent of market fee payable under this Act, provided that no market fee is leviable on flowers, fruits and vegetables. Instead the Market committee may collect user charges in respect of the above articles, user charges for such services provided by the Market Committee from the buyer of the produce at such rates as may be specified in the bye-laws as approved by the Director of Agricultural Marketing ."

**4. Amendment of section 72.-** In section 72 of the principal Act,-

(i) the word "trader" occurring in two places shall be omitted; and

(ii) after sub-section (3), the following shall be inserted, namely:-

"(4) The Director of Agricultural Marketing or the Officer authorised by him may grant a trader license in such manner and in such form as may be prescribed to operate as trader in any of Agricultural Produce Marketing Committee yards/private markets in the State. The existing licensee shall obtain a fresh trader licence within a period of six months from the date of commencement of the Karnataka Agricultural Produce Marketing (Regulation and Development) (Second Amendment) Act, 2013"

**5. Amendment of section 72A.-** In section 72A of the principal Act, in sub-section (2), for clause (b), the following shall be substituted, namely:-

"(b) establish a Direct Purchase Center to purchase notified agricultural produce directly from an agriculturist; or"

**6. Amendment of section 72D.-** In section 72D of the principal Act, in sub-section (1), after the words, figures "section 72C", the words, figures and brackets " or section 72 (4)" shall be inserted.

**7. Amendment of section 131C.-** In section 131C of the principal Act,-

(i) in sub-section (1), the words "with the Market Committee or" shall be omitted;

(ii) for sub-section (4), the following shall be substituted, namely:-

"(4) Any disputes arising out of contract farming agreement shall be decided by the Registering Authority. He shall resolve the dispute in a summary manner within thirty days from the date of reference of dispute by giving the parties a reasonable opportunity of being heard, in such manner as may be prescribed."

(iii) in sub-section (5), for the words "Disputes Committee", the words "Registering Authority" shall be substituted.

**8. Amendment of section 133.-** In section 133 of the principal Act, after the words "any class of co-operative societies", the words "or farmers producer organizations in the State" shall be inserted.

By Order and in the name of the Governor of Karnataka

**K. B. CHANGAPPA**
Secretary to Government (i/c)
Department of Parliamentary Affairs and Legislation


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಶನಿವಾರ, ಜನವರಿ ೪, ೨೦೧೪ (ಪುಷ್ಯ ೧೪, ಶಕ ವರ್ಷ ೧೯೩೫) | ನಂ. ೧೩ |
| **Part – IV-A** | **Bangalore, Saturday, January 4, 2014 (Pushya 14, Shaka Varsha 1935)** | **No. 13** |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 55 ಶಾಸನ 2013, ಬೆಂಗಳೂರು, ದಿನಾಂಕ: 04.01.2014**

ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ (ತಿದ್ದುಪಡಿ) ವಿಧೇಯಕ, 2013ಕ್ಕೆ 2014ರ ಜನವರಿ ಮಾಹೆಯ ಮೂರನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2014ರ ಕರ್ನಾಟಕ ಅಧಿನಿಯಮ ಸಂಖ್ಯೆ: **06** ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2014ರ ಕರ್ನಾಟಕ ಅಧಿನಿಯಮ ಸಂಖ್ಯೆ: 06**

(2014ರ ಜನವರಿ ನಾಲ್ಕನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2013

(2014ರ ಜನವರಿ ಮೂರನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009ನ್ನು (2010ರ ಕರ್ನಾಟಕ ಅಧಿನಿಯಮ 10) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 12ನೇ ಪ್ರಕರಣದ ತಿದ್ದುಪಡಿ.–** ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009ರ (2010ರ ಕರ್ನಾಟಕ ಅಧಿನಿಯಮ 10) 12ನೇ ಪ್ರಕರಣದಲ್ಲಿ (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ವ್ಯವಸ್ಥಾಪನಾ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು,–

| | | |
|---|---|---|
| (i) | ವಿಶ್ವವಿದ್ಯಾಲಯದ ಕುಲಪತಿಯವರು | ಅಧ್ಯಕ್ಷರು |
| (ii) | ಕೃಷಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಅವರಿಂದ ನಾಮನಿರ್ದೇಶಿತರಾದ ಜಂಟಿ ಕಾರ್ಯದರ್ಶಿ ದರ್ಜೆಗೆ ಕಡಿಮೆಯಲ್ಲದ ವ್ಯಕ್ತಿ; | ಸದಸ್ಯರು |

| | | |
|---|---|---|
| (iii) | ಆರ್ಥಿಕ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಅವರಿಂದ ನಾಮನಿರ್ದೇಶಿತರಾದ ಉಪ ಕಾರ್ಯದರ್ಶಿ ದರ್ಜೆಗೆ ಕಡಿಮೆಯಲ್ಲದ ವ್ಯಕ್ತಿ; | ಸದಸ್ಯರು |
| (iv) | ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಅವರಿಂದ ನಾಮನಿರ್ದೇಶಿತರಾದ ಜಂಟಿ ಕಾರ್ಯದರ್ಶಿ ದರ್ಜೆಗೆ ಕಡಿಮೆಯಲ್ಲದ ವ್ಯಕ್ತಿ; | ಸದಸ್ಯರು |
| (v) | ವಿಶ್ವವಿದ್ಯಾಲಯದ ಅಧಿಕಾರ ವ್ಯಾಪ್ತಿಯಲ್ಲಿನ ಮೂವರು ಪ್ರಗತಿಪರ ರೈತರು, ಅವರಲ್ಲಿ ಕನಿಷ್ಠ ಒಬ್ಬರು ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಯಾಗಿರತಕ್ಕದ್ದು | ಸದಸ್ಯರು |
| (vi) | ಬೆಂಗಳೂರು, ಧಾರವಾಡ, ರಾಯಚೂರು ಇಲ್ಲಿನ ವಿಶ್ವವಿದ್ಯಾಲಯಗಳಲ್ಲಿ ಪ್ರತಿಯೊಂದಕ್ಕೂ ಮತ್ತು ಶಿವಮೊಗ್ಗದಲ್ಲಿನ ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯಕ್ಕೆ, ಸುತ್ತು ಸರದಿಯ ಆಧಾರದ ಮೇಲೆ, ಸಭಾಧ್ಯಕ್ಷರು ನಾಮನಿರ್ದೇಶನ ಮಾಡಿದ ಕರ್ನಾಟಕ ರಾಜ್ಯ ವಿಧಾನಸಭೆಯ ಮೂವರು ಸದಸ್ಯರು ಮತ್ತು ಸಭಾಪತಿಯವರು ನಾಮನಿರ್ದೇಶನ ಮಾಡಿದ ಕರ್ನಾಟಕ ರಾಜ್ಯ ವಿಧಾನ ಪರಿಷತ್ತಿನ ಒಬ್ಬರು ಸದಸ್ಯರು. | ಸದಸ್ಯರು |
| (vii) | ಕುಲಾಧಿಪತಿಯವರು ನಾಮನಿರ್ದೇಶನ ಮಾಡುವ ಕೃಷಿ ವಲಯದಲ್ಲಿನ ಒಬ್ಬರು ಖ್ಯಾತ ಶಿಕ್ಷಣ ತಜ್ಞರು ಅಥವಾ ತಜ್ಞರು | ಸದಸ್ಯರು |
| (viii) | ಕುಲಾಧಿಪತಿಯವರು ನಾಮನಿರ್ದೇಶನ ಮಾಡುವ ಒಬ್ಬರು ಕೃಷಿ–ಕೈಗಾರಿಕೋದ್ಯಮಿ ಅಥವಾ ಮಹಿಳಾ ಸಮಾಜ ಸೇವಕಿ | ಸದಸ್ಯರು |
| (ix) | ಮಹಾನಿರ್ದೇಶಕರು ನಾಮನಿರ್ದೇಶನ ಮಾಡುವ ಭಾರತೀಯ ಕೃಷಿ ಸಂಶೋಧನಾ ಪರಿಷತ್ತಿನಿಂದ ಒಬ್ಬರು ಪ್ರತಿನಿಧಿ | ಸದಸ್ಯರು |
| (x) | ಎರಡು ವರ್ಷಗಳ ಅವಧಿಗೆ ಸುತ್ತು ಸರದಿಯ ಮೂಲಕ ಕುಲಪತಿಯವರು ನಾಮನಿರ್ದೇಶನ ಮಾಡುವ ಒಬ್ಬರು ಡೀನ್ | ಸದಸ್ಯರು |
| (xi) | ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ | ಸದಸ್ಯ–ಕಾರ್ಯದರ್ಶಿ" |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಬಿ. ಚೆಂಗಪ್ಪ**
ಸರ್ಕಾರದ ಕಾರ್ಯದರ್ಶಿ(ಪ್ರ)
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ – IV-A<br>Part – IV-A | ಬೆಂಗಳೂರು, ಶನಿವಾರ, ಜನವರಿ ೪, ೨೦೧೪ (ಪುಷ್ಯ ೧೪, ಶಕ ವರ್ಷ ೧೯೩೫)<br>Bangalore, Saturday, January 4, 2014 (Pushya 14, Shaka Varsha 1935) | ನಂ. ೧೪<br>No. 14 |
|---|---|---|



## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 05 ಶಾಸನ 2013, ಬೆಂಗಳೂರು, ದಿನಾಂಕ: 04.01.2014**

ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) (ತಿದ್ದುಪಡಿ) ವಿಧೇಯಕ, 2013ಕ್ಕೆ 2014ರ ಜನವರಿ ತಿಂಗಳ ಮೂರನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 03 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2014ರ ಕರ್ನಾಟಕ ಅಧಿನಿಯಮ ಸಂಖ್ಯೆ 03**

(2014ರ ಜನವರಿ ತಿಂಗಳ ನಾಲ್ಕನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) (ತಿದ್ದುಪಡಿ) ಅಧಿನಿಯಮ, 2013**

(2014ರ ಜನವರಿ ತಿಂಗಳ ಮೂರನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) ಅಧಿನಿಯಮ, 2002ನ್ನು ತಿದ್ದುಪಡಿ ಮಾಡುವುದಕ್ಕಾಗಿ ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) ಅಧಿನಿಯಮ, 2002 (2003ರ ಕರ್ನಾಟಕ ಅಧಿನಿಯಮ 45)ನ್ನು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) ಅಧಿನಿಯಮ, 2002ರ (2003ರ ಕರ್ನಾಟಕ ಅಧಿನಿಯಮ 45) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2ನೇ ಪ್ರಕರಣದಲ್ಲಿ (x) ನೇ ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(xi) **'ರಾಜ್ಯ ಮಟ್ಟದ ಪ್ರಾಧಿಕೃತ ಸಮಿತಿ'** ಎಂದರೆ, 11ಎ ಪ್ರಕರಣದ ಅಡಿಯಲ್ಲಿ ರಚಿಸಲಾದ ರಾಜ್ಯ ಮಟ್ಟದ ಪ್ರಾಧಿಕೃತ ಸಮಿತಿ;"

**3. 3ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 3ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ "ಐವತ್ತು ಕೋಟಿ ರೂಪಾಯಿಗಳು" ಎಂಬ ಪದಗಳಿಗೆ "ಒಂದು ನೂರು ಕೋಟಿ ರೂಪಾಯಿಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 6ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 6ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ "ಮೂರು ಕೋಟಿ ರೂಪಾಯಿಗಳಿಗಿಂತ ಹೆಚ್ಚು ಮತ್ತು ಐವತ್ತುಕೋಟಿ ರೂಪಾಯಿಗಳಿಗಿಂತ ಕಡಿಮೆ" ಎಂಬ ಪದಗಳಿಗೆ "ಹದಿನೈದು ಕೋಟಿ ರೂಪಾಯಿಗಳಿಗಿಂತ ಹೆಚ್ಚು ಮತ್ತು ಒಂದು ನೂರು ಕೋಟಿ ರೂಪಾಯಿಗಳಿಗಿಂತ ಕಡಿಮೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**5. 9ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 9ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ, "ಮೂರು ಕೋಟಿ ರೂಪಾಯಿಗಳ" ಎಂಬ ಪದಗಳಿಗೆ "ಹದಿನೈದು ಕೋಟಿ ರೂಪಾಯಿಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**6. 11ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 11ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"11ಎ. ರಾಜ್ಯ ಮಟ್ಟದ ಪ್ರಾಧಿಕೃತ ಸಮಿತಿ.–** (1) ಸರ್ಕಾರವು ಈ ಮುಂದಿನವರನ್ನು ಒಳಗೊಂಡ ರಾಜ್ಯ ಮಟ್ಟದ ಪ್ರಾಧಿಕೃತ ಸಮಿತಿಯನ್ನು ರಚಿಸಬಹುದು, ಎಂದರೆ:–

| | | |
|---|---|---|
| ಎ | ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | ಅಧ್ಯಕ್ಷರು |
| ಬಿ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆಗಳ ಇಲಾಖೆ | ಸದಸ್ಯರು |
| ಸಿ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | ಸದಸ್ಯರು |
| ಡಿ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ | ಸದಸ್ಯರು |
| ಇ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಇಂಧನ ಇಲಾಖೆ | ಸದಸ್ಯರು |
| ಎಫ್ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ | ಸದಸ್ಯರು |
| ಜಿ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| ಎಚ್ | ಸರ್ಕಾರದ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ | ಸದಸ್ಯರು |
| ಐ | ಸರ್ಕಾರದ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆಗಳ ಇಲಾಖೆ (ಸಣ್ಣ ಪ್ರಮಾಣದ ಕೈಗಾರಿಕೆಗಳು, ಜವಳಿ ಮತ್ತು ಗಣಿ) | ಸದಸ್ಯರು |
| ಜೆ | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಕೃಷಿ ಇಲಾಖೆ | ಸದಸ್ಯರು |
| ಕೆ | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ | ಸದಸ್ಯರು |
| ಎಲ್ | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ | ಸದಸ್ಯರು |
| ಎಮ್ | ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಲಿ | ಸದಸ್ಯರು |
| ಎನ್ | ಪೊಲೀಸು ಮಹಾ ನಿರ್ದೇಶಕರು ಮತ್ತು ಮಹಾನಿರೀಕ್ಷಕರು, ಕರ್ನಾಟಕ ರಾಜ್ಯ ಅಗ್ನಿ ಶಾಮಕ ಮತ್ತು ತುರ್ತು ಸೇವೆಗಳು | ಸದಸ್ಯರು |
| ಒ | ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕಾರ್ಯನಿರ್ವಹಣಾ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿ, ಬೆಂಗಳೂರು | ಸದಸ್ಯರು |
| ಪಿ | ಕೈಗಾರಿಕಾ ಅಭಿವೃದ್ಧಿ ಆಯುಕ್ತರು ಮತ್ತು ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶಕರು | ಸದಸ್ಯ ಕಾರ್ಯದರ್ಶಿ |

**ಟಿಪ್ಪಣಿ:–** ಈ ಪ್ರಕರಣದ ಉದ್ದೇಶಕ್ಕಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಎಂದರೆ, "ಕೈಗಾರಿಕೆಗಳು (ಸೌಲಭ್ಯ)" ವಿಷಯದ ಪ್ರಭಾರವನ್ನು ಹೊಂದಿರುವ ಸರ್ಕಾರದ ಕಾರ್ಯದರ್ಶಿಗಳು ಅಥವಾ ಪ್ರಧಾನ ಕಾರ್ಯದರ್ಶಿಗಳು ಅಥವಾ ಅಪರ ಮುಖ್ಯ ಕಾರ್ಯದರ್ಶಿಗಳು.

(2) ಸಮಿತಿಯು, ಅವಶ್ಯವಿದ್ದಲ್ಲಿ ಅಂಥ ಪರಿಣತಿ ಅಥವಾ ಜ್ಞಾನವನ್ನುಳ್ಳ ವ್ಯಕ್ತಿಯನ್ನು ಸಹ–ಸದಸ್ಯನನ್ನಾಗಿ ಸೇರಿಸಿಕೊಳ್ಳಬಹುದು.

(3) ರಾಜ್ಯ ಮಟ್ಟದ ಪ್ರಾಧಿಕೃತ ಸಮಿತಿಯ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು,–

(i) ರಾಜ್ಯ ಮಟ್ಟದ ಏಕಗವಾಕ್ಷಿ–ಒಪ್ಪಿಗೆ ನೀಡಿಕೆ ಸಮಿತಿ ಮತ್ತು ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿಯು ಒಪ್ಪಿಗೆ ನೀಡಿದ ಯೋಜನೆಗಳ ಅನುಷ್ಠಾನದ ಪ್ರಗತಿಯನ್ನು ಮೇಲ್ವಿಚಾರಣೆ ಮಾಡುವುದು;

(ii) ನಿಯಮಿಸಬಹುದಾದ ಅಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸುವುದು."

**7. 14ನೇ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 14ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"14. ಸಂಯೋಜಿತ ಅರ್ಜಿ ನಮೂನೆಗಳು (Combined Application Forms) (CAF).-** ರಾಜ್ಯ ಸರ್ಕಾರವು, ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿ ಅಥವಾ ರಾಜ್ಯ ಉನ್ನತ ಮಟ್ಟದ ಏಕ ಗವಾಕ್ಷಿ ಒಪ್ಪಿಗೆ ನೀಡಿಕೆ ಸಮಿತಿ ಅಥವಾ ಜಿಲ್ಲಾ ಮಟ್ಟದ ಏಕಗವಾಕ್ಷಿ ಒಪ್ಪಿಗೆ ನೀಡಿಕೆ ಸಮಿತಿಯಿಂದ ಒಪ್ಪಿಗೆಯನ್ನು ಪಡೆಯುವುದಕ್ಕಾಗಿ ಉದ್ಯಮಿಗಳ ಬಳಕೆಗಾಗಿ ಸಂಯೋಜಿತ ಅರ್ಜಿ ನಮೂನೆಯೊಂದನ್ನು ನಿಯಮಿಸಬಹುದು. ಅಗತ್ಯಪಡಿಸಿದ ಒಪ್ಪಿಗೆಗಳನ್ನು ಪಡೆಯುವುದಕ್ಕಾಗಿ ಕಾರ್ಖಾನೆಗಳ ಅಧಿನಿಯಮ, 1948ರ 41ಎ ಪ್ರಕರಣದಲ್ಲಿ ಮತ್ತು ಅದರಡಿಯಲ್ಲಿ ರಚಿಸಲಾದ ನಿಯಮಗಳ ಅಡಿಯಲ್ಲಿ ಕಾರ್ಖಾನೆಗೆ ಲೈಸೆನ್ಸು ನೀಡುವುದಕ್ಕಾಗಿನ ಅರ್ಜಿಯನ್ನು ಹೊರತುಪಡಿಸಿ ಅನ್ವಯವಾಗುವ ಕೇಂದ್ರ ಹಾಗೂ ರಾಜ್ಯ ಅಧಿನಿಯಮಗಳ ಅಡಿಯಲ್ಲಿ ನಿಯಮಿಸಲಾದ ಪ್ರಸ್ತುತ ಇರುವ ನಮೂನೆಗಳ ಬದಲಾಗಿ ಸಹ ಈ ಸಂಯೋಜಿತ ಅರ್ಜಿ ನಮೂನೆಯನ್ನು ಬಳಸತಕ್ಕದ್ದು. ಸಂಬಂಧಪಟ್ಟ ಎಲ್ಲಾ ಇಲಾಖೆಗಳು ಅಥವಾ ಪ್ರಾಧಿಕಾರಗಳು ಅಂಥ ಸಂಯೋಜಿತ ಅರ್ಜಿ ನಮೂನೆಯನ್ನು ಪರಿಶೀಲನೆಗಾಗಿ ಮತ್ತು ಅಗತ್ಯಪಡಿಸಿದ ಒಪ್ಪಿಗೆಗಳನ್ನು ನೀಡುವುದಕ್ಕಾಗಿ ಅಂಗೀಕರಿಸತಕ್ಕದ್ದು."

**8. 16ನೇ ಪ್ರಕರಣವನ್ನು ಬಿಟ್ಟುಬಿಡುವುದು.–** ಮೂಲ ಅಧಿನಿಯಮದ 16ನೇ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**9. 18ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 18ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ.–

**"18ಎ. ಪುನರವಲೋಕನ.-** (1) ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿಯ ತೀರ್ಮಾನದಿಂದ ಬಾಧಿತನಾದ ಯಾವೊಬ್ಬ ಅರ್ಜಿದಾರನು,–

(ಎ) ಅಂಥ ಸಮಿತಿಯು, ಯಾವ ಹೊಸ ಸಂಗತಿಗಳು ಅಥವಾ ಕಾರಣಗಳ ಮೇಲೆ ಅದರ ತೀರ್ಮಾನವನ್ನು ಪುನರ್ ಪರಿಶೀಲಿಸಬೇಕಾಗಿದೆಯೋ ಅಂಥ ಹೊಸ ಸಂಗತಿಗಳನ್ನು ಅಥವಾ ಕಾರಣಗಳನ್ನು ಅರ್ಜಿದಾರನು ಹೊಂದಿದ್ದರೆ,

(ಬಿ) ತೀರ್ಮಾನದಲ್ಲಿ ಹೊರನೋಟಕ್ಕೆ ಕಾಣಬರುವ ಸ್ಪಷ್ಟವಾದ ದೋಷಗಳನ್ನು ತೋರಿಸಿಕೊಟ್ಟರೆ,–

–ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿಗೆ, ಅದು ಈ ಹಿಂದೆ ನೀಡಿದ ತೀರ್ಮಾನವನ್ನು ಪುನರವಲೋಕಿಸುವಂತೆ ಅಪೀಲು ಮಾಡಿಕೊಳ್ಳಬಹುದು.

(2) ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿಯು ಅಂಥ ಅರ್ಜಿಯನ್ನು ಪರಿಗಣಿಸಬಹುದು ಮತ್ತು ಸೂಕ್ತ ತೀರ್ಮಾನವನ್ನು ಕೈಗೊಳ್ಳಬಹುದು ಮತ್ತು ಅದು ಅಂತಿಮವಾಗಿರತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಬಿ. ಚೆಂಗಪ್ಪ**
ಸರ್ಕಾರದ ಕಾರ್ಯದರ್ಶಿ(ಪ್ರ)
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A<br>Part – IV-A | ಬೆಂಗಳೂರು, ಶನಿವಾರ, ಜನವರಿ ೪, ೨೦೧೪ (ಪುಷ್ಯ ೧೪, ಶಕ ವರ್ಷ ೧೯೩೫)<br>Bangalore, Saturday, January 4, 2014 (Pushya 14, Shaka Varsha 1935) | ನಂ. ೧೫<br>No. 15 |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 4 ಎಸ್‌ಎಸ್‌ಆರ್ 2013, ಬೆಂಗಳೂರು, ದಿನಾಂಕ: 04.01.2014**

ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಅಧಿನಿಯಮ ಸಂಖ್ಯೆ:14)ರ 8ನೇ ಪ್ರಕರಣದೊಡನೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ನಿಯಮಗಳ ಕರಡನ್ನು ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ ಪ್ರಕರಣ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ಅದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಅದು ಪ್ರಕಟವಾದ ದಿನಾಂಕದಿಂದ 15 ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಮೇಲೆ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಸದರಿ ಕರಡು ನಿಯಮಗಳಿಗೆ ಸಂಬಂಧಿಸಿದಂತೆ, ಯಾವುದೇ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರ ಪರಿಗಣಿಸುವುದು. ಆಕ್ಷೇಪಣೆ ಅಥವಾ ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನ ಸೌಧ, ಬೆಂಗಳೂರು–560 001 ಇವರಿಗೆ ಕಳುಹಿಸಬಹುದು.

**ಕರಡು ನಿಯಮಗಳು**

1. **ಶಿರೋನಾಮೆ ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) (. . ತಿದ್ದುಪಡಿ) ನಿಯಮಗಳು, 2013 ಎಂದು ಕರೆಯತಕ್ಕದ್ದು.

(2) ಇದು ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಷೆಡ್ಯೂಲ್–I ರ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರ ಷೆಡ್ಯೂಲ್–I ರ "ಕನ್ನಡ ಭಾಷಾ ಪರೀಕ್ಷೆ ಪಠ್ಯ ಕ್ರಮ'' ಶೀರ್ಷಿಕೆಯಡಿ ಇರುವ ಪತ್ರಿಕೆ–I, ಖಂಡ–ಬಿ ನಮೂದುಗಳಡಿ ಇರುವ "ಕನ್ನಡ ಕಸ್ತೂರಿ" ಪದಗಳ ಬದಲು "ಸಿರಿ ಕನ್ನಡ" ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಮಂಗಳ. ಜಿ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

## PERSONNEL AND ADMINISTRATIVE REFORMS SECRETARIAT
## NOTIFICATION
### No. DPAR 4 SSR 2013, Bangalore, dated: 04.01.2014

The draft of the following rules further to amend the Karnataka Civil Services (Service and Kannada Language Examinations) Rules, 1974, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion, which may be received by the State Government from any person with respect to the said draft before the expiry of the period specified above will be considered by the State Government. Objections or suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore – 560 001.

**DRAFT RULES**

**1. Title and Commencement and application:-**

(1) These rules may be called the Karnataka Civil Services (Service and Kannada Language Examinations) (……Amendment)Rules, 2013.

(2) They shall come into force from the date of their publication in the Official Gazette.

**2. Amendment of Schedule- I. -** In Schedule – **I** to the Karnataka Civil Services (Service and Kannada Language Examinations) Rules, 1974, under the heading "SYLLABUS FOR THE KANNADA LANGUAGE EXAMINATION" in paper-I, in the entries under the clause (b), for the words " Kannada Kastoori" the words " Siri Kannada '' shall be substituted.

By Order and in the name of the Governor of Karnataka

**Dr.Mangala.G.S.**
Under Secretary to Government
Department of Personnel & Administrative Reforms
(Service Rules-1)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಶನಿವಾರ, ಜನವರಿ ೪, ೨೦೧೪ (ಪುಷ್ಯ ೧೪, ಶಕ ವರ್ಷ ೧೯೩೫) | ನಂ. ೧೬ |
|---|---|---|
| Part – III | Bangalore, Saturday, January 4, 2014 (Pushya 14, Shaka Varsha 1935) | No. 16 |


## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 141 ಸೇಸಕಿ 2013, ಬೆಂಗಳೂರು, ದಿನಾಂಕ: 04–01–2014**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ: 1–1–1980 ರಿಂದ 31–12–2004 ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ: 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರು ದಿನಾಂಕ 12–11–2013ರ ಪತ್ರದಲ್ಲಿ ಶ್ರೀ ಹೆಚ್.ಜಿ.ಗುಂಡಳ್ಳಿ, ಸಹಾಯಕ ಇಂಜಿನಿಯರ್, ಇವರು ನೇರ ನೇಮಕಾತಿ ಮೂಲಕ ದಿನಾಂಕ: 24–1–1986ರಂದು ಕಿರಿಯ ಇಂಜಿನಿಯರ್ ಹುದ್ದೆಯ ಕರ್ತವ್ಯಕ್ಕೆ ಸೇರಿದ್ದು, ತದನಂತರ ಕಿರಿಯ ಇಂಜಿನಿಯರ್ ವೃಂದದಿಂದ ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿ ದಿನಾಂಕ 5–3–2004 ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾಪಟ್ಟಿಯಲ್ಲಿ ಇವರ ಹೆಸರು ಸೇರ್ಪಡೆಗೊಂಡಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಮುಂದುವರೆದು ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದ ಅನುಸಾರ ಬಿ.ಇ.ಪದವಿ ಪಡೆದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿದಲ್ಲಿ ನಿಯಮಗಳಂತೆ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ 1/3 ಭಾಗದಷ್ಟು ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತೆಯಲ್ಲಿ ಪರಿಗಣಿಸಲು ಅವಕಾಶ ಕಲ್ಪಿಸಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ: 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಜೇಷ್ಠತೆಯನ್ನು ದಿನಾಂಕ 5–3–2000 ರಿಂದ ಪರಿಗಣಿಸಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ಕಲ್ಪಿಸಿರುವ ಅವಕಾಶದಂತೆ, ಪದವಿ ಹೊಂದಿದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ಹುದ್ದೆಗೆ ವೃಂದ ಬದಲಾವಣೆಯ ಮುಖಾಂತರ ವರ್ಗಾವಣೆಯಾಗಿ ನೇಮಕಗೊಂಡ ತರುವಾಯ ಅವರುಗಳಿಗೆ ಸಹಾಯಕ ಇಂಜಿನಿಯರ್ ಹುದ್ದೆಯಿಂದ ಮುಂದಿನ ಹುದ್ದೆಯಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಪದೋನ್ನತಿಗೆ ಪರಿಗಣಿಸುವ ಸಂದರ್ಭದಲ್ಲಿ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ ಸೇವೆಯಲ್ಲಿ 1/3ನೇ ಭಾಗ ಗರಿಷ್ಟ 4 ವರ್ಷಗಳ ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದಕ್ಕೆ ಪರಿಗಣಿಸಿ ಸಹಾಯಕ ಇಂಜಿನಿಯರ್ ಹುದ್ದೆಯ ಜೇಷ್ಠತೆಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಲು ಅವಕಾಶ ಕಲ್ಪಿಸಲಾಗಿದೆ. ಆದ್ದರಿಂದ ಶ್ರೀ ಹೆಚ್.ಜಿ.ಗುಂಡಳ್ಳಿ ಸಹಾಯಕ ಇಂಜಿನಿಯರ್ ಇವರು ಈ ಹಿಂದೆ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ದಿನಾಂಕ 24–1–1986 ರಿಂದ 5–4–2004 ರವರೆಗೆ ಸಲ್ಲಿಸಿದ ಸೇವೆಯಲ್ಲಿ 1/3 ಭಾಗದ ಸೇವೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ–1 ವೃಂದಕ್ಕೆ ಪದೋನ್ನತಿಗೆ ಪರಿಗಣಿಸುವ ಸಲುವಾಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದಲ್ಲಿ ಕಲ್ಪಿಸಿರುವ ಅವಕಾಶದಂತೆ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ದಿನಾಂಕ 5–3–2000ಕ್ಕೆ ಕಾಲ್ಪನಿಕವಾಗಿ ಪರಿಗಣಿಸಿ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ: 15–11–2010ರ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3815–A ರಲ್ಲಿ ಈ ಕೆಳಕಂಡಂತೆ ನಿಗದಿಪಡಿಸಿ ಸೇರ್ಪಡೆ ಮಾಡಲು ಉದ್ದೇಶಿಸಿದೆ.

| Ranking No | Previous AE. GRD No. | Name of the Engineer | SC/ ST | Date of Birth | Date of Entry into service | Date of Regular Appoint ment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3815-A | - | HONNAPPA G. GUNDALLI | | 06-07-1965 | 24-01-1986 | 05-03-2004<br>05-03-2000 * | CC |

* He shall be entitled to count his seniority from the notional date, only for the purpose of consideration for promotion to the post of Assistant Executive Engineer (Division-I).

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು / ಅಧಿಕಾರಿಗಳು ಅವರ ಆಕ್ಷೇಪಣೆ / ಮನವಿ ಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಕಾರ್ಯದರ್ಶಿಗಳು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು 560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು-ಬಿ)

# ವಿಶೇಷ ರಾಜ್ಯ ಪತ್ರಿಕೆ



| ಭಾಗ - III | ಬೆಂಗಳೂರು, ಶನಿವಾರ, ಜನವರಿ ೪, ೨೦೧೪ (ಪುಷ್ಯ ೧೪, ಶಕ ವರ್ಷ ೧೯೩೫) | ನಂ. ೧೭ |
|---|---|---|
| Part - III | Bangalore, Saturday, January 4, 2014 (Pushya 14, Shaka Varsha 1935) | No. 17 |



## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 351 ಸೇಸಕಿ 2013, ಬೆಂಗಳೂರು, ದಿನಾಂಕ: 04-01-2014**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ:98:ಸೇಸಕಿ:08 ದಿನಾಂಕ 15-11-2010ರಲ್ಲಿ ದಿನಾಂಕ: 1-1-1980 ರಿಂದ 31-12-2004 ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ: 22-11-2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರು ದಿನಾಂಕ 25-11-2013ರ ಪತ್ರದಲ್ಲಿ ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯಲ್ಲಿ ಕೈಗಾರಿಕಾ ವಿಸ್ತರಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಬಸವರಾಜ್ ಇವರ ಸೇವೆಯನ್ನು ಸರ್ಕಾರದ ಆದೇಶ ಸಂಖ್ಯೆ ಲೋಇ:32:ಸೇಸಕಿ:2000 ದಿನಾಂಕ: 30-9-2000ರಲ್ಲಿ ಲೋಕೋಪಯೋಗಿ ಇಲಾಖೆಯ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ವಿಲೀನಗೊಳಿಸಲಾಗಿದ್ದು ಸದರಿಯವರು ಲೋಕೋಪಯೋಗಿ ಇಲಾಖೆಯ ಕಿರಿಯ ಇಂಜಿನಿಯರ್ ಹುದ್ದೆಯ ಕರ್ತವ್ಯಕ್ಕೆ ದಿನಾಂಕ: 13-11-2000ರಂದು ಹಾಜರಾಗಿದ್ದು, ತದನಂತರ ಕಿರಿಯ ಇಂಜಿನಿಯರ್ ಹುದ್ದೆಯಿಂದ ಸಹಾಯಕ ಇಂಜಿನಿಯರ್ ಹುದ್ದೆಗೆ ವೃಂದ ಬದಲಾವಣೆ ಹೊಂದಿ ದಿನಾಂಕ: 11-6-2003 ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾಪಟ್ಟಿಯಲ್ಲಿ ಇವರ ಹೆಸರು ಸೇರ್ಪಡೆಗೊಂಡಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಮುಂದುವರೆದು ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದ ಅನುಸಾರ ಬಿ.ಇ.ಪದವಿ ಪಡೆದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿದಲ್ಲಿ ನಿಯಮಗಳಂತೆ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ 1/3 ಭಾಗದಷ್ಟು ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತೆಯಲ್ಲಿ ಪರಿಗಣಿಸಲು ಅವಕಾಶ ಕಲ್ಪಿಸಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ: 15-11-2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಜೇಷ್ಠತೆಯನ್ನು ದಿನಾಂಕ: 2-8-2002 ರಿಂದ ಪರಿಗಣಿಸಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ಕಲ್ಪಿಸಿರುವ ಅವಕಾಶದಂತೆ, ಪದವಿ ಹೊಂದಿದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ಹುದ್ದೆಗೆ ವೃಂದ ಬದಲಾವಣೆಯ ಮುಖಾಂತರ ವರ್ಗಾವಣೆಯಾಗಿ ನೇಮಕಗೊಂಡ ತರುವಾಯ ಅವರುಗಳಿಗೆ ಸಹಾಯಕ ಇಂಜಿನಿಯರ್ ಹುದ್ದೆಯಿಂದ ಮುಂದಿನ ಹುದ್ದೆಯಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಪದೋನ್ನತಿಗೆ ಪರಿಗಣಿಸುವ ಸಂದರ್ಭದಲ್ಲಿ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ ಸೇವೆಯಲ್ಲಿ 1/3ನೇ ಭಾಗ ಗರಿಷ್ಠ 4 ವರ್ಷಗಳ ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದಕ್ಕೆ ಪರಿಗಣಿಸಿ ಸಹಾಯಕ ಇಂಜಿನಿಯರ್ ಹುದ್ದೆಯ ಜೇಷ್ಠತೆಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಲು ಅವಕಾಶ ಕಲ್ಪಿಸಲಾಗಿದೆ. ಆದ್ದರಿಂದ ಶ್ರೀ ಬಸವರಾಜ್ ಸಹಾಯಕ ಇಂಜಿನಿಯರ್ ಇವರು ಈ ಹಿಂದೆ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ದಿನಾಂಕ 13-11-2000 ರಿಂದ 11-6-2003 ರವರೆಗೆ ಸಲ್ಲಿಸಿದ ಸೇವೆಯಲ್ಲಿ 1/3 ಭಾಗದ ಸೇವೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ-1 ವೃಂದಕ್ಕೆ ಪದೋನ್ನತಿಗೆ ಪರಿಗಣಿಸುವ ಸಲುವಾಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದಲ್ಲಿ ಕಲ್ಪಿಸಿರುವ ಅವಕಾಶದಂತೆ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ದಿನಾಂಕ: 2-8-2002ಕ್ಕೆ ಕಾಲ್ಪನಿಕವಾಗಿ ಪರಿಗಣಿಸಿ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ: 15-11-2010ರ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3916-A ರಲ್ಲಿ ಈ ಕೆಳಕಂಡಂತೆ ನಿಗದಿಪಡಿಸಿ ಸೇರ್ಪಡೆ ಮಾಡಲು ಉದ್ದೇಶಿಸಿದೆ.

| Ranking No | Provision AE. GRD No. | Name of the Engineer | SC/ ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3916-A | - | BASAVARAJ | | 20-07-1968 | 13-11-2000 | 11-06-2003<br>02-08-2002 * | CC |

* He shall be entitled to count his seniority from the notional date, only for the purpose of consideration for promotion to the post of Assistant Executive Engineer (Division-I).

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಕಾರ್ಯದರ್ಶಿಗಳು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು 560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು-ಬಿ)

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ - III<br>Part - III | ಬೆಂಗಳೂರು, ಸೋಮವಾರ, ಜನವರಿ ೬, ೨೦೧೪ (ಪುಷ್ಯ ೧೬, ಶಕ ವರ್ಷ ೧೯೩೫)<br>**Bangalore, Monday, January 6, 2014 (Pushya 16, Shaka Varsha 1935)** | ನಂ. ೧೮<br>**No. 18** |

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಂತಿಮ ಅಧಿಸೂಚನೆ

**ನಂ.ಎಡಿಎಂ(1)ಸಿಆರ್/ 76 /13-14, ಬೆಂಗಳೂರು, ದಿನಾಂಕ: 06-01-2014**

ಸರ್ಕಾರದ ಆದೇಶ ಸಂಖ್ಯೆ 666 ಎಎಸ್‌ಡಿ 2012 ದಿನಾಂಕ 04-07-2013 ರ ಆದೇಶದಂತೆ, ಬೆಂಗಳೂರು ನಗರ ಜಿಲ್ಲೆಯ 5 ತಾಲ್ಲೂಕುಗಳಿಗೆ ತಲಾ ಮೂರು ರಾಜಸ್ವ ನಿರೀಕ್ಷಕರು ಮತ್ತು ಮೂರು ಗ್ರಾಮಲೆಕ್ಕಿಗರ ಹೊಸ ಹುದ್ದೆಗಳನ್ನು ಸೃಜಿಸಲಾಗಿರುವಂತೆ ಈ ಕಾರ್ಯಾಲಯದ ಸಮ ಸಂಖ್ಯೆ ದಿನಾಂಕ 11-12-2013 ರ ಪತ್ರದಂತೆ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ 19-12-2013 ರಂದು ಭಾಗ-3 ರಲ್ಲಿ ಬೆಂಗಳೂರು ನಗರ ಜಿಲ್ಲೆಯ 5 ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಸರ್ಕಾರದ ಆದೇಶದಂತೆ ಮಂಜೂರು ಮಾಡಿರುವ ರಾಜಸ್ವ ನಿರೀಕ್ಷಕರ ಮತ್ತು ಗ್ರಾಮಲೆಕ್ಕಿಗರ ವೃತ್ತಗಳನ್ನು ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ರ ಕಲಂ 4 ಮತ್ತು 5 ಹಾಗೂ ಕರ್ನಾಟಕ ಭೂ ಕಂದಾಯ ನಿಯಮಗಳು 1966 ರ ನಿಯಮ 3 ರನ್ವಯ ವಿಭಜಿಸಲು ಕರಡು ಅಧಿಸೂಚನೆಯನ್ನು ಪ್ರಕಟಿಸಲಾಗಿದ್ದು, ಪ್ರಕಟಣೆಯ ದಿನಾಂಕದಿಂದ 15 ದಿನಗಳಲ್ಲಿ ಆಕ್ಷೇಪಣೆಗಳನ್ನು ನೇರವಾಗಿ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು.

ಅದರಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕಿನ ಬಾಗಲೂರು ಮತ್ತು ಸುತ್ತಮುತ್ತಲಿನ ಗ್ರಾಮಸ್ಥರು ದಿನಾಂಕ 28-12-2013 ರಂದು ಜಾಲ ಹೋಬಳಿಯಲ್ಲಿ ಮರು ವಿಂಗಡಿಸಿರುವ ವೃತ್ತಗಳ ಬಗ್ಗೆ ಆಕ್ಷೇಪಣೆಯನ್ನು ಸಲ್ಲಿಸಿದ್ದು, ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರು ಪರಿಶೀಲಿಸಿ ದಿನಾಂಕ 30-12-2013 ರಂದು ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ಆಕ್ಷೇಪಣೆ ಹೊರತುಪಡಿಸಿ ಇತರೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ದಿನಾಂಕ 19-12-2013 ರಂದು ಹೊರಡಿಸಿರುವ ಕರಡು ಅಧಿಸೂಚನೆಯ ಪತ್ರದಲ್ಲಿ ಕೆಲವು ಬೆರಳಚ್ಚು ತಪ್ಪುಗಳಾಗಿದ್ದು, ಸದರಿ ತಪ್ಪುಗಳನ್ನು ಸರಿಪಡಿಸಲಾಗಿರುತ್ತದೆ.

ಆದ್ದರಿಂದ ಸರ್ಕಾರದ ಆದೇಶ ಸಂಖ್ಯೆ:666 ಎಎಸ್‌ಡಿ 2012 ದಿನಾಂಕ 04-07-2013 ರ ಆದೇಶದಂತೆ ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ರ ಕಲಂ 4 ಮತ್ತು 5 ಹಾಗೂ ಕರ್ನಾಟಕ ಭೂ ಕಂದಾಯ ನಿಯಮಗಳು 1966 ರ ನಿಯಮ 3ರನ್ವಯ ಸ್ವೀಕೃತವಾಗಿರುವ ಆಕ್ಷೇಪಣೆಗಳನ್ನು ಅಳವಡಿಸಿಕೊಂಡು ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಸದರಿ ಹುದ್ದೆಗಳು ಜಾರಿಗೆ ಬರುವಂತೆ ಅಂತಿಮ ಅಧಿಸೂಚನೆಯನ್ನು ಹೊರಡಿಸಲಾಗಿದೆ.

**ಜಿಲ್ಲಾಧಿಕಾರಿಗಳು**
**ಬೆಂಗಳೂರು ಜಿಲ್ಲೆ, ಬೆಂಗಳೂರು**

**ಬೆಂಗಳೂರು ಉತ್ತರ ತಾಲ್ಲೂಕು:**
**ವಿಭಜಿಸಿ ಹೊಸದಾಗಿ ಸೃಜಿಸಿರುವ ರಾಜಸ್ವ ನಿರೀಕ್ಷಕರ ವೃತ್ತಗಳು.**

1.ಹಾಲಿ ಕಾರ್ಯನಿರ್ವಹಿಸುತ್ತಿರುವ ಚಾಮರಾಜಪೇಟೆ ವೃತ್ತವನ್ನು ವಿಭಜಿಸಿ ಹೊಸದಾಗಿ ಚಾಮರಾಜಪೇಟೆ-2 ಎಂಬ ವೃತ್ತವನ್ನು ಸೃಜಿಸಲಾಗಿದೆ.

| 1.ಚಾಮರಾಜಪೇಟೆ ವೃತ್ತ – 1<br>ಕೇಂದ್ರಸ್ಥಾನ – ಚಾಮರಾಜಪೇಟೆ<br>ಒಳಪಡುವ ವಾರ್ಡ್‌ಗಳು/ಗ್ರಾಮಗಳು | | | 2. ಚಾಮರಾಜಪೇಟೆ ವೃತ್ತ – 2 (ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ – ಚಾಮರಾಜಪೇಟೆ<br>ಒಳಪಡುವ ವಾರ್ಡ್‌ಗಳು/ಗ್ರಾಮಗಳು | | |
|---|---|---|---|---|---|
| **ಕ್ರ.ಸಂ.** | **ವಾರ್ಡ್ ಸಂಖ್ಯೆ** | **ವಾರ್ಡ್ ಹೆಸರು** | **ಕ್ರ.ಸಂ.** | **ವಾರ್ಡ್ ಸಂಖ್ಯೆ** | **ವಾರ್ಡ್ ಹೆಸರು** |
| 1 | 135 | ಪಾದರಾಯನಪುರ | 1 | 157 | ಘಾಳಿಆಂಜನೇಯಸ್ವಾಮಿ ದೇವಸ್ಥಾನ |
| 2 | 136 | ಜಗಜೀವನರಾಂನಗರ | 2 | 158 | ದೀಪಾಂಜಲಿನಗರ |
| 3 | 137 | ರಾಯಪುರಂ | 3 | 134 | ಬಾಪೂಜಿನಗರ |
| 4 | 138 | ಚಲುವಾದಿಪಾಳ್ಯ | | | |
| 5 | 140 | ಚಾಮರಾಜಪೇಟೆ | | | |
| 6 | 141 | ಆಜಾದ್‌ನಗರ | | | |
| 7 | 155 | ಗವಿಪುರಂ | | | |

2.ಹಾಲಿ ಕಾರ್ಯನಿರ್ವಹಿಸುತ್ತಿರುವ ರಾಜಾಜಿನಗರ ಸಿಟಿವೃತ್ತ ಮತ್ತು ಮಲ್ಲೇಶ್ವರಂ ವೃತ್ತವನ್ನು ವಿಭಜಿಸಿ, ಮರುವಿಂಗಡಿಸಿ ರಾಜಾಜಿನಗರ-2 ಎಂಬ ಹೊಸ ವೃತ್ತವನ್ನು ಸೃಜಿಸಲಾಗಿದೆ.

| 1.ರಾಜಾಜಿನಗರ ಸಿಟಿ ವೃತ್ತ – 1<br>ಕೇಂದ್ರಸ್ಥಾನ – ರಾಜಾಜಿನಗರ<br>ಒಳಪಡುವ<br>ವಾರ್ಡ್‌ಗಳು/ಗ್ರಾಮಗಳು | | | 2. ರಾಜಾಜಿನಗರ ಸಿಟಿವೃತ್ತ – 2 (ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ – ರಾಜಾಜಿನಗರ ಒಳಪಡುವ ವಾರ್ಡ್‌ಗಳು/ಗ್ರಾಮಗಳು | | | 3. ಮಲ್ಲೇಶ್ವರಂ ವೃತ್ತ<br>ಕೇಂದ್ರಸ್ಥಾನ – ಮಲ್ಲೇಶ್ವರಂ ಒಳಪಡುವ ವಾರ್ಡ್‌ಗಳು/ಗ್ರಾಮಗಳು | | |
|---|---|---|---|---|---|---|---|---|
| **ಕ್ರ ಸಂ.** | **ವಾರ್ಡ್ ಸಂಖ್ಯೆ** | **ವಾರ್ಡ್ ಹೆಸರು** | **ಕ್ರ. ಸಂ.** | **ವಾರ್ಡ್ ಸಂಖ್ಯೆ** | **ವಾರ್ಡ್ ಹೆಸರು** | **ಕ್ರ. ಸಂ.** | **ವಾರ್ಡ್ ಸಂಖ್ಯೆ** | **ವಾರ್ಡ್ ಹೆಸರು** |
| 1 | 67 | ನಾಗಪುರ | 1 | 68 | ಮಹಾಲಕ್ಷ್ಮಿ ಪುರಂ ಲೇಔಟ್ | 1 | 45 | ಮಲ್ಲೇಶ್ವರಂ |
| 2 | 75 | ನಾಗಪುರ | 2 | 36 | ಮತ್ತಿಕೆರೆ | 2 | 66 | ಸುಬ್ರಮಣ್ಯನಗರ |
| 3 | 107 | ಶಿವನಗರ | 3 | 44 | ಮಾರಪ್ಪನಪಾಳ್ಯ | 3 | 65 | ಕಾಡುಮಲ್ಲೇಶ್ವರ |
| 4 | 108 | ಶ್ರೀರಾಮಮಂದಿರ | 4 | 42 | ಗೊರಗುಂಟೆಪಾಳ್ಯ | 4 | 17 | ಜೆ.ಪಿ.ಪಾರ್ಕ್ |
| 5 | 97 | ದಯಾನಂದನಗರ | 5 | 38 | ಹೆಚ್.ಎಂ.ಟಿ. | 5 | 64 | ರಾಜಮಹಲ್ ಗುಟ್ಟಹಳ್ಳಿ |
| 6 | 98 | ಪ್ರಕಾಶ್‌ನಗರ | | | | 6 | 95 | ಸುಭಾಷ್‌ನಗರ |
| 7 | 99 | ರಾಜಾಜಿನಗರ | | | | 7 | 37 | ಯಶವಂತಪುರ |
| | | | | | | 8 | 77 | ದತ್ತಾತ್ರೇಯ ದೇವಸ್ಥಾನ |

3.ಹಾಲಿ ಕಾರ್ಯನಿರ್ವಹಿಸುತ್ತಿರುವ ಯಶವಂತಪುರ ಹೋಬಳಿಯ ಸಾಣೆಗುರುವನಹಳ್ಳಿ ವೃತ್ತವನ್ನು ವಿಭಜಿಸಿ ಸಾಣೆಗುರುವನಹಳ್ಳಿ- 2 ಎಂಬ ಹೊಸ ವೃತ್ತವನ್ನು ಸೃಜಿಸಲಾಗಿದೆ.

| 1. ಸಾಣೆಗುರುವನಹಳ್ಳಿ-1<br>ಕೇಂದ್ರಸ್ಥಾನ – ಮಲ್ಲತ್ತಹಳ್ಳಿ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | | 1. ಸಾಣೆಗುರುವನಹಳ್ಳಿ-2 (ಹೊಸದಾಗಿ ಸೃಜಿಸಲಾದ ವೃತ್ತ – ಸಾಣೆಗುರುವನಹಳ್ಳಿ ವೃತ್ತ)<br>ಕೇಂದ್ರಸ್ಥಾನ – ಸಾಣೆಗುರುವನಹಳ್ಳಿ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | |
|---|---|---|---|
| **ಕ್ರ.ಸಂ.** | **ವೃತ್ತದ ಹೆಸರು** | **ಕ್ರ.ಸಂ.** | **ವೃತ್ತದ ಹೆಸರು** |
| 1 | ಮಲ್ಲತ್ತಹಳ್ಳಿ | 1 | ಸಾಣೆಗುರುವನಹಳ್ಳಿ |
| 2 | ಹೇರೋಹಳ್ಳಿ | 2 | ಚೊಕ್ಕಸಂದ್ರ |
| 3 | ಕೊಡಿಗೇಹಳ್ಳಿ | | |

**ಮಂಜೂರು ಮಾಡಿರುವಂತಹ 3 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಈ ಕೆಳಕಂಡಂತೆ ಸೃಜಿಸಲಾಗಿರುತ್ತದೆ.**

| **ಸೃಜಿಸಲಾಗಿರುವ ಗ್ರಾಮಲೆಕ್ಕಿಗರ ಹುದ್ದೆ** | **ಕಾರ್ಯನಿರ್ವಹಿಸಬೇಕಾದ ಸ್ಥಳ** |
|---|---|
| ಗ್ರಾಮಲೆಕ್ಕಿಗರು, ಅಟಲ್‌ಜೀ ಜನಸ್ನೇಹಿ ಕೇಂದ್ರ, ಸಿಟಿವೃತ್ತ ರಾಜಾಜಿನಗರ | ಅಟಲ್‌ಜೀ ಜನಸ್ನೇಹಿ ಕೇಂದ್ರ, ಸಿಟಿವೃತ್ತ ರಾಜಾಜಿನಗರ |
| ಗ್ರಾಮಲೆಕ್ಕಿಗರು, ಅಟಲ್‌ಜೀ ಜನಸ್ನೇಹಿ ಕೇಂದ್ರ, ಸಿಟಿವೃತ್ತ ಯಶವಂತಪುರ | ಅಟಲ್‌ಜೀ ಜನಸ್ನೇಹಿ ಕೇಂದ್ರ, ಸಿಟಿವೃತ್ತ ಸಾಣೆಗುರುವನಹಳ್ಳಿ |
| ಗ್ರಾಮಲೆಕ್ಕಿಗರು, ಅಟಲ್‌ಜೀ ಜನಸ್ನೇಹಿ ಕೇಂದ್ರ, ಸಿಟಿವೃತ್ತ ರಾಜಾಜಿನಗರ | ಅಟಲ್‌ಜೀ ಜನಸ್ನೇಹಿ ಕೇಂದ್ರ, ಸಿಟಿವೃತ್ತ ರಾಜಾಜಿನಗರ |

**ಬೆಂಗಳೂರು ದಕ್ಷಿಣ ತಾಲ್ಲೂಕು:**

**ವಿಭಜಿಸಿ ಹೊಸದಾಗಿ ಸೃಜಿಸಿರುವ ರಾಜಸ್ವ ನಿರೀಕ್ಷಕರ ವೃತ್ತಗಳು.**

1.ಹಾಲಿ ಕಾರ್ಯನಿರ್ವಹಿಸುತ್ತಿರುವ ಕೆಂಗೇರಿ ಹೋಬಳಿಯ ಕೆಂಗೇರಿ–1 ರಾಜಸ್ವ ನಿರೀಕ್ಷಕರ ವೃತ್ತವನ್ನು ವಿಭಜಿಸಿ ಕೆಂಗೇರಿ–4 (ರಾಜರಾಜೇಶ್ವರಿನಗರ) ಎಂಬ ವೃತ್ತವನ್ನು ಸೃಜಿಸಲಾಗಿದೆ.

| 1.ಕೆಂಗೇರಿ – 1<br>ಕೇಂದ್ರಸ್ಥಾನ – ಕೆಂಗೇರಿ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತದ ಹೆಸರು | | 2.ಕೆಂಗೇರಿ–4 (ರಾಜರಾಜೇಶ್ವರಿನಗರ–ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ - ಪಟ್ಟಣಗೆರೆ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತದ ಹೆಸರು | |
|---|---|---|---|
| **ಕ್ರ.ಸಂ.** | **ವೃತ್ತದ ಹೆಸರು** | **ಕ್ರ.ಸಂ.** | **ವೃತ್ತದ ಹೆಸರು** |
| 1 | ಕೆಂಗೇರಿ | 1 | ಪಟ್ಟಣಗೆರೆ |
| 2 | ಸೂಲಿಕೆರೆ | 2 | ಹಲಗೆವಡೇರಹಳ್ಳಿ |

2.ಹಾಲಿ ಕಾರ್ಯನಿರ್ವಹಿಸುತ್ತಿರುವ ಉತ್ತರಹಳ್ಳಿ ಹೋಬಳಿಯ ಬನಶಂಕರಿ ರಾಜಸ್ವ ನಿರೀಕ್ಷಕರ ವೃತ್ತವನ್ನು ವಿಭಜಿಸಿ ತ್ಯಾಗರಾಜನಗರ ಎಂಬ ವೃತ್ತವನ್ನು ಸೃಜಿಸಲಾಗಿದೆ.

| 1.ಬನಶಂಕರಿ ವೃತ್ತ<br>ಕೇಂದ್ರಸ್ಥಾನ – ಬನಶಂಕರಿ<br>ಒಳಪಡುವ ವಾರ್ಡ್‌ಗಳು/ಗ್ರಾಮಗಳು | | | 2.ತ್ಯಾಗರಾಜನಗರ (ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ – ತ್ಯಾಗರಾಜನಗರ<br>ಒಳಪಡುವ ವಾರ್ಡ್‌ಗಳು/ಗ್ರಾಮಗಳು | | |
|---|---|---|---|---|---|
| **ಕ್ರ.ಸಂ.** | **ವಾರ್ಡ್ ಸಂಖ್ಯೆ** | **ವಾರ್ಡ್ ಹೆಸರು** | **ಕ್ರ.ಸಂ.** | **ವಾರ್ಡ್ ಸಂಖ್ಯೆ** | **ವಾರ್ಡ್ ಹೆಸರು** |
| 1 | 155 | ಹನುಮಂತನಗರ | 1 | 154 | ತ್ಯಾಗರಾಜನಗರ |
| 2 | 156 | ಶ್ರೀನಗರ | 2 | 166 | ಕರಿಸಂದ್ರ |
| 3 | 162 | ಗಿರಿನಗರ | 3 | 167 | ಯಡಿಯೂರು |
| 4 | 164 | ಶ್ರೀನಿವಾಸನಗರ | 4 | 182 | ಪದ್ಮನಾಭನಗರ |
| 5 | 165 | ಗಣೇಶಮಂದಿರ | | | |

3.ಹಾಲಿ ಕಾರ್ಯನಿರ್ವಹಿಸುತ್ತಿರುವ ಉತ್ತರಹಳ್ಳಿ ಹೋಬಳಿಯ ಉತ್ತರಹಳ್ಳಿ–1, ಉತ್ತರಹಳ್ಳಿ–2, ಉತ್ತರಹಳ್ಳಿ–3 ಮತ್ತು ಉತ್ತರಹಳ್ಳಿ–4 ವೃತ್ತವನ್ನು ಮರುವಿಂಗಡಿಸಿ ಉತ್ತರಹಳ್ಳಿ–5 ಚಿಕ್ಕಲ್ಲಸಂದ್ರ ಎಂಬ ರಾಜಸ್ವ ನಿರೀಕ್ಷಕರ ವೃತ್ತವನ್ನು ಸೃಜಿಸಲಾಗಿದೆ.

| 1.ಚಿಕ್ಕಲ್ಲಸಂದ್ರ ವೃತ್ತ (ಹೊಸದಾಗಿ ಸೃಜಿಸಲಾದ ರಾಜಸ್ವ ನಿರೀಕ್ಷಕರ ವೃತ್ತ)<br>ಕೇಂದ್ರಸ್ಥಾನ – ಚಿಕ್ಕಲ್ಲಸಂದ್ರ ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | |
|---|---|
| ಕ್ರ.ಸಂ. | ವೃತ್ತದ ಹೆಸರು |
| 1 | ಚಿಕ್ಕಲ್ಲಸಂದ್ರ (ಹೊಸದಾಗಿ ಸೃಜಿಸಲಾದ ವೃತ್ತ) |
| 2 | ಭೈರಸಂದ್ರ (ಹೊಸದಾಗಿ ಸೃಜಿಸಲಾದ ವೃತ್ತ) |

**ಮಂಜೂರು ಮಾಡಿರುವಂತಹ 3 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಈ ಕೆಳಕಂಡಂತೆ ಸೃಜಿಸಲಾಗಿರುತ್ತದೆ.**

1.ಹಾಲಿ ಕಾರ್ಯನಿರ್ವಹಿಸುತ್ತಿರುವ ಉತ್ತರಹಳ್ಳಿ ಹೋಬಳಿಯ ಸಾರಕ್ಕಿ ಗ್ರಾಮಲೆಕ್ಕಿಗರ ವೃತ್ತದಿಂದ ಮತ್ತು ಕತ್ರಿಗುಪ್ಪೆ ಗ್ರಾಮಲೆಕ್ಕಿಗರ ವೃತ್ತದಿಂದ ಗ್ರಾಮಗಳನ್ನು ವಿಭಜಿಸಿ ಭೈರಸಂದ್ರ ಎಂಬ ಹೊಸ ವೃತ್ತವನ್ನು ಸೃಜಿಸಲಾಗಿದೆ.

| 1ಸಾರಕ್ಕಿ ವೃತ್ತ<br>ಒಳಪಡುವ ಗ್ರಾಮಗಳು | | 2. ಕತ್ರಿಗುಪ್ಪೆ ವೃತ್ತ<br>ಒಳಪಡುವ ಗ್ರಾಮಗಳು | | 3.ಭೈರಸಂದ್ರ ವತ್ತ (ಹೊಸದಾಗಿ ಸೃಜಿಸಲಾದ ವೃತ್ತ)<br>ಒಳಪಡುವ ಗ್ರಾಮಗಳು | |
|---|---|---|---|---|---|
| **ಕ್ರ.ಸಂ.** | **ಗ್ರಾಮದ ಹೆಸರು** | **ಕ್ರ.ಸಂ.** | **ಗ್ರಾಮದ ಹೆಸರು** | **ಕ್ರ.ಸಂ.** | **ಗ್ರಾಮದ ಹೆಸರು** |
| 1 | ಸಾರಕ್ಕಿ | 1 | ಕತ್ರಿಗುಪ್ಪೆ | 1 | ಕರೀಸಂದ್ರ |
| 2 | ಮಾರೇನಹಳ್ಳಿ | 2 | ಆವಲಹಳ್ಳಿ | 2 | ಗೋವಿನಾಯಕನಹಳ್ಳಿ |
| 3 | ಪುಟ್ಟೇನಹಳ್ಳಿ | 3 | ಇಟ್ಟಮಡು | 3 | ಭೈರಸಂದ್ರ |
| 4 | ಯಲಚೇನಹಳ್ಳಿ | 4 | ಹೊಸಕೆರೆಹಳ್ಳಿ | 4 | ಯಡಿಯೂರು |
| 5 | ದೊಡ್ಡಕಲ್ಲಸಂದ್ರ | | | 5 | ಯಡಿಯೂರು ನಾಗಸಂದ್ರ |
| 6 | ಚುಂಚಘಟ್ಟ | | | | |
| 7 | ಜರಗನಹಳ್ಳಿ | | | | |
| 8 | ಸಾರಕ್ಕಿಕೆರೆ | | | | |

2.ಹಾಲಿ ಕಾರ್ಯನಿರ್ವಹಿಸುತ್ತಿರುವ ಉತ್ತರಹಳ್ಳಿ ಹೋಬಳಿಯ ಉತ್ತರಹಳ್ಳಿ ಗ್ರಾಮಲೆಕ್ಕಿಗರ ವೃತ್ತದಿಂದ ಮತ್ತು ಸುಬ್ರಮಣ್ಯಪುರ ಗ್ರಾಮಲೆಕ್ಕಿಗರ ವೃತ್ತದಿಂದ ಗ್ರಾಮಗಳನ್ನು ವಿಭಜಿಸಿ ಚಿಕ್ಕಲ್ಲಸಂದ್ರ ಎಂಬ ಹೊಸ ವೃತ್ತವನ್ನು ಸೃಜಿಸಲಾಗಿದೆ.

| 1.ಉತ್ತರಹಳ್ಳಿ ವೃತ್ತ<br>ಕೇಂದ್ರಸ್ಥಾನ – ಉತ್ತರಹಳ್ಳಿ<br>ಒಳಪಡುವ ಗ್ರಾಮಗಳು | | 2. ಸುಬ್ರಮಣ್ಯಪುರ ವೃತ್ತ<br>ಕೇಂದ್ರಸ್ಥಾನ– ಸುಬ್ರಮಣ್ಯಪುರ<br>ಒಳಪಡುವ ಗ್ರಾಮಗಳು | | ಚಿಕ್ಕಲ್ಲಸಂದ್ರ (ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ – ಚಿಕ್ಕಲ್ಲಸಂದ್ರ<br>ಒಳಪಡುವ ಗ್ರಾಮಗಳು | |
|---|---|---|---|---|---|
| **ಕ್ರ.ಸಂ.** | **ಗ್ರಾಮದ ಹೆಸರು** | **ಕ್ರ.ಸಂ.** | **ಗ್ರಾಮದ ಹೆಸರು** | **ಕ್ರ.ಸಂ.** | **ಗ್ರಾಮದ ಹೆಸರು** |
| 1 | ಉತ್ತರಹಳ್ಳಿ | 1 | ಸುಬ್ರಮಣ್ಯಪುರ | 1 | ಚಿಕ್ಕಲ್ಲಸಂದ್ರ |
| 2 | ಅರೇಹಳ್ಳಿ | 2 | ವಸಂತಪುರ | 2 | ಕದಿರೇನಹಳ್ಳಿ |
| 3 | ಚನ್ನಸಂದ್ರ | 3 | ಗುಬ್ಬಿಲಾಳ | 3 | ಬಿಕಾಸಿಪುರ |
| 4 | ವಡ್ಡರಪಾಳ್ಯ | 4 | ತುರಹಳ್ಳಿ | | |

3.ಹಾಲಿ ಕಾರ್ಯನಿರ್ವಹಿಸುತ್ತಿರುವ ಕೆಂಗೇರಿ ಹೋಬಳಿಯ ಪಟ್ಟಣಗೆರೆ ಗ್ರಾಮಲೆಕ್ಕಿಗರ ವೃತ್ತವನ್ನು ವಿಭಜಿಸಿ ಹಲಗೆವಡೇರಹಳ್ಳಿ ಎಂಬ ಹೊಸ ವೃತ್ತವನ್ನು ಸೃಜಿಸಲಾಗಿದೆ.

| 1.ಪಟ್ಟಣಗೆರೆ ವೃತ್ತ<br>ಕೇಂದ್ರಸ್ಥಾನ – ಪಟ್ಟಣಗೆರೆ<br>ಒಳಪಡುವ ಗ್ರಾಮಗಳು | | 2. ಹಲಗೆವಡೇರಹಳ್ಳಿ ವೃತ್ತ (ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ – ಹಲಗೆವಡೇರಹಳ್ಳಿ<br>ಒಳಪಡುವ ಗ್ರಾಮಗಳು | |
|---|---|---|---|
| **ಕ್ರ.ಸಂ.** | **ಗ್ರಾಮದ ಹೆಸರು** | **ಕ್ರ.ಸಂ.** | **ಗ್ರಾಮದ ಹೆಸರು** |
| 1 | ಪಟ್ಟಣಗೆರೆ | 1 | ನಾಯಂಡಹಳ್ಳಿ |
| 2 | ಮೈಲಸಂದ್ರ | 2 | ಪಂತರಪಾಳ್ಯ |
| 3 | ಗಾಣಕಲ್ಲು | 3 | ಹಲಗೆವಡೇರಹಳ್ಳಿ |
| 4 | ಕೆಂಚೇನಹಳ್ಳಿ | 4 | ದೀವಟಿಗೆ ರಾಮನಹಳ್ಳಿ |

**ಆನೇಕಲ್ ತಾಲ್ಲೂಕು:**

ವಿಭಜಿಸಬಹುದಾದ ರಾಜಸ್ವ ನಿರೀಕ್ಷಕರ ವೃತ್ತಗಳು.

1.ಹಾಲಿ ಕಾರ್ಯನಿರ್ವಹಿಸುತ್ತಿರುವ ಕಸಬಾ ಹೋಬಳಿಯ ಕಸಬಾ ರಾಜಸ್ವ ನಿರೀಕ್ಷಕರ ವೃತ್ತವನ್ನು ವಿಭಜಿಸಿ ಕಸಬಾ–1 ಮತ್ತು ಕಸಬಾ–2 ಎಂಬ ವೃತ್ತವನ್ನು ವಿಂಗಡಿಸಿ ಕಸಬಾ–2 ವೃತ್ತವನ್ನು ಹೊಸದಾಗಿ ಸೃಜಿಸಲಾಗಿದೆ.

| 1.ಕಸಬಾ–1<br>ಕೇಂದ್ರಸ್ಥಾನ – ಕಸಬಾ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತದ ಹೆಸರು | | 2.ಕಸಬಾ–2 (ಮರಸೂರು ವೃತ್ತ –ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ – ಮರಸೂರು<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತದ ಹೆಸರು | |
|---|---|---|---|
| **ಕ್ರ.ಸಂ.** | **ವೃತ್ತದ ಹೆಸರು** | **ಕ್ರ.ಸಂ.** | **ವೃತ್ತದ ಹೆಸರು** |
| 1 | ತಮ್ಮನಾಯಕನಹಳ್ಳಿ | 1 | ಮರಸೂರು |
| 2 | ವಣಕನಹಳ್ಳಿ | 2 | ದೊಡ್ಡಹಾಗಡೆ |
| 3 | ತೆಲಗರಹಳ್ಳಿ | 3 | ಬ್ಯಾಗಡದೇನಹಳ್ಳಿ |
| 4 | ಇಂಡ್ಲವಾಡಿ | 4 | ಮಡಿವಾಳ |
| 5 | ಸಮಂದೂರು | 5 | ಕರ್ಪೂರು |
| 6 | ಸುರಗಜಕ್ಕನಹಳ್ಳಿ | 6 | ರಾಚಮಾನಹಳ್ಳಿ |
| 7 | ಆನೇಕಲ್ ಗ್ರಾಮಾಂತರ (ಹೊಸ ಗ್ರಾ.ಲೆ. ವೃತ್ತ) | | |

2. ಹಾಲಿ ಕಾರ್ಯನಿರ್ವಹಿಸುತ್ತಿರುವ ಜಿಗಣಿ ಹೋಬಳಿಯ ಜಿಗಣಿ ರಾಜಸ್ವ ನಿರೀಕ್ಷಕರ ವೃತ್ತವನ್ನು ಮರುವಿಂಗಡಿಸಿ ಜಿಗಣಿ–1 ಮತ್ತು ಜಿಗಣಿ–2 (ಬನ್ನೇರುಘಟ್ಟ) ಎಂಬ ವೃತ್ತವನ್ನು ಹೊಸದಾಗಿ ಸೃಜಿಸಲಾಗಿದೆ.

| 1.ಜಿಗಣಿ–1<br>ಕೇಂದ್ರಸ್ಥಾನ – ಜಿಗಣಿ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | | 2. ಜಿಗಣಿ–2 (ಬನ್ನೇರುಘಟ್ಟ–ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ –ಬನ್ನೇರುಘಟ್ಟ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | |
|---|---|---|---|
| **ಕ್ರ.ಸಂ.** | **ವೃತ್ತದ ಹೆಸರು** | **ಕ್ರ.ಸಂ.** | **ವೃತ್ತದ ಹೆಸರು** |
| 1 | ಜಿಗಣಿ | 1 | ಬನ್ನೇರುಘಟ್ಟ |
| 2 | ಕ್ಯಾಲಸನಹಳ್ಳಿ | 2 | ಮಂಟಪ |
| 3 | ಹೆನ್ನಾಗರ | 3 | ಹುಲ್ಲಹಳ್ಳಿ |
| 4 | ರಾಜಾಪುರ | 4 | ರಾಗಿಹಳ್ಳಿ |
| 5 | ಹಾರಗದ್ದೆ | 5 | ಕೊಪ್ಪ |
| 6 | ನೊಸೆನೂರು | 6 | ಹುಲಿಮಂಗಲ |
| 7 | ಬುಕ್ಕಸಾಗರ | 7 | ಕಲ್ಕೆರೆ (ಹೊಸ ಗ್ರಾ.ಲೆ.ವೃತ್ತ) |

3.ಹಾಲಿ ಕಾರ್ಯನಿರ್ವಹಿಸುತ್ತಿರುವ ಸರ್ಜಾಪುರ ಹೋಬಳಿಯ ಸರ್ಜಾಪುರ–1 ಮತ್ತು ಸರ್ಜಾಪುರ–2 ರಾಜಸ್ವ ನಿರೀಕ್ಷಕರ ವೃತ್ತವನ್ನು ಮರುವಿಂಗಡಿಸಿ ಸರ್ಜಾಪುರ–3 ಎಂಬ ಹೊಸ ವೃತ್ತವನ್ನು ಸೃಜಿಸಲಾಗಿದೆ.

| 1.ಸರ್ಜಾಪುರ–1<br>ಕೇಂದ್ರಸ್ಥಾನ – ಸರ್ಜಾಪುರ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | | 2. ಸರ್ಜಾಪುರ–2<br>(ಹುಸ್ಕೂರು ವೃತ್ತ)<br>ಕೇಂದ್ರಸ್ಥಾನ – ಹುಸ್ಕೂರು<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | | ಸರ್ಜಾಪುರ –3 (ದೊಮ್ಮಸಂದ್ರ ವೃತ್ತ – ಹೊಸದಾಗಿ<br>ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ –ದೊಮ್ಮಸಂದ್ರ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | |
|---|---|---|---|---|---|
| **ಕ್ರ.ಸಂ.** | **ವೃತ್ತದ ಹೆಸರು** | **ಕ್ರ.ಸಂ.** | **ವೃತ್ತದ ಹೆಸರು** | **ಕ್ರ.ಸಂ.** | **ವೃತ್ತದ ಹೆಸರು** |
| 1 | ವಿ.ಕಲ್ಲಹಳ್ಳಿ | 1 | ಹುಸ್ಕೂರು | 1 | ದೊಮ್ಮಸಂದ್ರ |
| 2 | ಮುಗಳೂರು | 2 | ಕೂಡ್ಲು | 2 | ಯಮರೆ |
| 3 | ಕೂಗೂರು | 3 | ನಾರಾಯಣಘಟ್ಟ | 3 | ಬಿಕ್ಕನಹಳ್ಳಿ |
| 4 | ಎಸ್.ಮೇಡಹಳ್ಳಿ | 4 | ಮುತ್ತನಲ್ಲೂರು | 4 | ನೆರಿಗಾ |
| 5 | ಹಂದೇನಹಳ್ಳಿ | | | 5 | ಕತ್ರಿಗುಪ್ಪೆ |

**ಮಂಜೂರು ಮಾಡಿರುವಂತಹ 3 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಈ ಕೆಳಕಂಡಂತೆ ಸೃಜಿಸಲಾಗಿರುತ್ತದೆ.**

1.ಹಾಲಿ ಕಾರ್ಯನಿರ್ವಹಿಸುತ್ತಿರುವ ಕಸಬಾ ಹೋಬಳಿಯ ತೆಲಗರಹಳ್ಳಿ ಗ್ರಾಮಲೆಕ್ಕಿಗರ ವೃತ್ತವನ್ನು ವಿಭಜಿಸಿ ಆನೇಕಲ್ ಗ್ರಾಮಾಂತರ ಎಂಬ ಹೊಸ ವೃತ್ತವನ್ನು ಸೃಜಿಸಲಾಗಿದೆ.

| 1.ತೆಲಗರಹಳ್ಳಿ<br>ಕೇಂದ್ರಸ್ಥಾನ – ತೆಲಗರಹಳ್ಳಿ<br>ಒಳಪಡುವ ಗ್ರಾಮಗಳ ಹೆಸರು | | 2. ಆನೇಕಲ್ ಗ್ರಾಮಾಂತರ(ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ – ಆನೇಕಲ್ ಗ್ರಾಮಾಂತರ<br>ಒಳಪಡುವ ಗ್ರಾಮಗಳ ಹೆಸರು | |
|---|---|---|---|
| **ಕ್ರ.ಸಂ.** | **ಗ್ರಾಮದ ಹೆಸರು** | **ಕ್ರ.ಸಂ.** | **ಗ್ರಾಮದ ಹೆಸರು** |
| 1 | ತೆಲಗರಹಳ್ಳಿ | 1 | ಆನೇಕಲ್ ಗ್ರಾಮಾಂತರ |
| 2 | ಸಿಂಗಸಂದ್ರ | 2 | ಸುಣವಾರ |
| 3 | ಪಟ್ಟಣಗೆರೆ ಗೊಲ್ಲಹಳ್ಳಿ | 3 | ಹೊಂಪಲಘಟ್ಟ |
| 4 | ಚೂಡೇನಹಳ್ಳಿ | | |

2.ಹಾಲಿ ಕಾರ್ಯನಿರ್ವಹಿಸುತ್ತಿರುವ ಜಿಗಣಿ ಹೋಬಳಿಯ ಬನ್ನೇರುಘಟ್ಟ ಗ್ರಾಮಲೆಕ್ಕಿಗರ ವೃತ್ತವನ್ನು ವಿಭಜಿಸಿ ಕಲ್ಕೆರೆ ಎಂಬ ಹೊಸ ವೃತ್ತವನ್ನು ಸೃಜಿಸಲಾಗಿದೆ.

| 1.ಬನ್ನೇರುಘಟ್ಟ<br>ಕೇಂದ್ರಸ್ಥಾನ – ಬನ್ನೇರುಘಟ್ಟ<br>ಒಳಪಡುವ ಗ್ರಾಮಗಳ ಹೆಸರು | | 2. ಕಲ್ಕೆರೆ (ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ – ಕಲ್ಕೆರೆ<br>ಒಳಪಡುವ ಗ್ರಾಮಗಳ ಹೆಸರು | |
|---|---|---|---|
| **ಕ್ರ.ಸಂ.** | **ಗ್ರಾಮದ ಹೆಸರು** | **ಕ್ರ.ಸಂ.** | **ಗ್ರಾಮದ ಹೆಸರು** |
| 1 | ಬನ್ನೇರುಘಟ್ಟ | 1 | ಕಲ್ಕೆರೆ |
| 2 | ಬನ್ನೇರುಘಟ್ಟ ಕಾವಲ್ | 2 | ಭೂತಾನಹಳ್ಳಿ |
| 3 | ಗೊಲ್ಲಹಳ್ಳಿ | 3 | ಬಿಲ್ವಾರದಹಳ್ಳಿ |
| 4 | ಬೈರಪ್ಪನಹಳ್ಳಿ | 4 | ಕನ್ನನಾಯ್ಕನಅಗ್ರಹಾರ |

3.ಹಾಲಿ ಕಾರ್ಯನಿರ್ವಹಿಸುತ್ತಿರುವ ಅತ್ತಿಬೆಲೆ ಹೋಬಳಿಯ ಹೆಬ್ಬಗೋಡಿ ಗ್ರಾಮಲೆಕ್ಕಿಗರ ವೃತ್ತವನ್ನು ವಿಭಜಿಸಿ ಕಮ್ಮಸಂದ್ರ ಎಂಬ ಹೊಸ ವೃತ್ತವನ್ನು ಸೃಜಿಸಲಾಗಿದೆ.

| 1.ಹೆಬ್ಬಗೋಡಿ<br>ಕೇಂದ್ರಸ್ಥಾನ – ಹೆಬ್ಬಗೋಡಿ<br>ಒಳಪಡುವ ಗ್ರಾಮಗಳ ಹೆಸರು | | 2. ಕಮ್ಮಸಂದ್ರ (ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ – ಕಮ್ಮಸಂದ್ರ<br>ಒಳಪಡುವ ಗ್ರಾಮಗಳ ಹೆಸರು | |
|---|---|---|---|
| **ಕ್ರ.ಸಂ.** | **ಗ್ರಾಮದ ಹೆಸರು** | **ಕ್ರ.ಸಂ.** | **ಗ್ರಾಮದ ಹೆಸರು** |
| 1 | ಹೆಬ್ಬಗೋಡಿ | 1 | ಕಮ್ಮಸಂದ್ರ |
| 2 | ಗೊಲ್ಲಹಳ್ಳಿ | 2 | ವಡ್ಡರಪಾಳ್ಯ |
| | | 3 | ವೀರಸಂದ್ರ |

**ಬೆಂಗಳೂರು ಉತ್ತರ (ಅಪರ) ತಾಲ್ಲೂಕು:**
**ವಿಭಜಿಸಬಹುದಾದ ರಾಜಸ್ವ ನಿರೀಕ್ಷಕರ ವೃತ್ತಗಳು.**

1.ಹಾಲಿ ಜಾಲ ಹೋಬಳಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ದೊಡ್ಡಜಾಲ ಮತ್ತು ಹುಣಸಮಾರನಹಳ್ಳಿ ವೃತ್ತಗಳನ್ನು ಮರುವಿಂಗಡಿಸಿ ಹೊಸದಾಗಿ ಜಾಲ–3 ನವರತ್ನ ಅಗ್ರಹಾರ ಎಂಬ ವೃತ್ತವನ್ನು ಸೃಜಿಸಲಾಗಿದೆ.

| 1.ಜಾಲ–1 (ದೊಡ್ಡಜಾಲ ವೃತ್ತ)<br>ಕೇಂದ್ರಸ್ಥಾನ – ದೊಡ್ಡಜಾಲ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | | 2. ಜಾಲ–2 (ಹುಣಸಮಾರನಹಳ್ಳಿ ವೃತ್ತ)<br>ಕೇಂದ್ರಸ್ಥಾನ – ಹುಣಸಮಾರನಹಳ್ಳಿ<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | | 3.ಜಾಲ–3(ಬಾಗಲೂರು ವೃತ್ತ–ಹೊಸದಾಗಿ ಸೃಜಿಸಲಾದ ವೃತ್ತ)<br>ಕೇಂದ್ರಸ್ಥಾನ – ಬಾಗಲೂರು<br>ಒಳಪಡುವ ಗ್ರಾಮಲೆಕ್ಕಿಗರ ವೃತ್ತಗಳು | |
|---|---|---|---|---|---|
| **ಕ್ರ.ಸಂ.** | **ವೃತ್ತದ ಹೆಸರು** | **ಕ್ರ.ಸಂ.** | **ವೃತ್ತದ ಹೆಸರು** | **ಕ್ರ.ಸಂ.** | **ವೃತ್ತದ ಹೆಸರು** |
| 1 | ದೊಡ್ಡಜಾಲ | 1 | ಬೆಟ್ಟಹಲಸೂರು | 1 | ಬಾಗಲೂರು |
| 2 | ಹುತ್ತನಹಳ್ಳಿ | 2 | ಹುಣಸಮಾರನಹಳ್ಳಿ | 2 | ಮಾರೇನಹಳ್ಳಿ |
| 3 | ತರಬನಹಳ್ಳಿ | 3 | ತರಹುಣಸೆ | 3 | ಸಿಂಗಹಳ್ಳಿ |
| | | | | 4 | ಬಿ.ಕೆ.ಹಳ್ಳಿ |

